# ಒಂದು ಅರಿಕೆ

ನನ್ನಷ್ಟಕ್ಕೆ ನಾನಿದ್ದೆ. ಹೇಗೋ ಸುಬ್ರಹ್ಮಣ್ಯಮಠದ ಶ್ರೀಪಾದರ ಕಣ್ಣಿಗೆ ಬಿದ್ದೆ. ಅವರು ಪ್ರೀತಿಯಿಂದ ಕರೆದು ಹೇಳಿದರು: "ನಮ್ಮಲ್ಲಿಗೆ ಬಾ. ಉಪನಿಷತ್ತುಗಳಲ್ಲಿ ನೀನು ಸವಿದದ್ದನ್ನು ನಮಗೂ ಉಣಿಸು".

ನಿರಾಕರಿಸುವುದು ಸಾಧ್ಯವೇ ಇಲ್ಲ. ಕರೆಯ ಹಿಂದಿದ್ದ ಪ್ರೀತಿಯ ಸೆಳೆತ ಅಂಥದು. ಉಪನಿಷತ್ತಿನ ಬಗೆಗಿನ ನನ್ನ ತಪದ ಫಲವನ್ನೆಲ್ಲ ಅವರ ಮುಂದೆ ಧಾರೆಯೆರೆದೆ. ಅವರು ಕಿವಿಯರಳಿಸಿ ಕೇಳಿದರು; ಕಣ್ಣರಳಿಸಿ ಹರಸಿದರು. ಆ ಕಣ್ಣ ಅರಳಿನಲ್ಲಿ ಕರುಳೆ ಕರಗಿ ಹರಿದಿತ್ತು.

ಒಂದು ದಿನ ಕರೆದು ಹೇಳಿದರು: "ಇದು ಗಾಳಿಗೆ ಹೋಗಬಾರದು. ಪುಸ್ತಕರೂಪದಲ್ಲಿ ತರಬೇಕು. ಇದರ ಒಂದೊಂದು ಮಾತೂ ತಲೆಮಾರಿನಿಂದ ತಲೆಮಾರಿಗೆ ಇಳಿದುಬರಬೇಕು."

ಅವರು ನುಡಿದಂತೆ ನಡೆದೇ ಬಿಟ್ಟರು. ಉಪನ್ಯಾಸದ ಧ್ವನಿಸುರುಳಿಯ ಹಸ್ತಪ್ರತಿಯನ್ನು ನನ್ನ ಕೈಗಿತ್ತು "ಮುದ್ರಣದ ಮುನ್ನ ಏನಾದರೂ ತಿದ್ದುಪಡಿ ಇದ್ದರೆ ಮಾಡಬಹುದು, ಮುದ್ರಣದ ವ್ಯವಸ್ಥೆ ಮಾಡಿದ್ದೇನೆ" ಎಂದರು.

ಅವರ ಉತ್ಸಾಹದಂತೆ ಕೆಲಸ ಸಾಗಿದ್ದರೆ ಇಷ್ಟರಲ್ಲಿ ಮೂರು ಉಪನಿಷತ್ತುಗಳ ಅನುವಾದವಾದರೂ ಬೆಳಕು ಕಾಣಬೇಕಿತ್ತು.

ನಾನು ಹಸ್ತಪ್ರತಿಯನ್ನು ಜೋಳಿಗೆಗೆ ತುಂಬಿಸಿ ತೆಪ್ಪಗೆ ಕುಳಿತೆ.

ಅವರು ಪದೇಪದೇ ಎಚ್ಚರಿಸಿದರು.

ತಿಂಗಳ ಕಾಲದಲ್ಲಿ ಆಗಬೇಕಾದ್ದಕ್ಕೆ ವರ್ಷಕಾಲ ತೆಗೆದುಕೊಂಡೆ.

ನನ್ನಂಥ ಸೋಮಾರಿಯ ಬೆನ್ನುಹತ್ತಿದ್ದಕ್ಕೆ ಅವರಿಗೆ ಪಶ್ಚಾತ್ತಾಪವಾಗಲಿಲ್ಲ.

ಅವರಂಥ ಸಹೃದಯರ ಉತ್ಸಾಹಕ್ಕೆ ತಕ್ಕಂತೆ ಸ್ಪಂದಿಸಲಾಗದ್ದಕ್ಕೆ ನನಗೆ ಪಶ್ಚಾತ್ತಾಪವಾಯಿತು.

ನನ್ನನ್ನೆ ನಾನು ಬೈದುಕೊಂಡೆ. ಬೈಯುತ್ತ ಬೈಯುತ್ತ ಬರೆದು ಮುಗಿಸಿದೆ.

ಉಪನಿಷತ್ತನ್ನು ಕಡೆದು ತೆಗೆದ ಬೆಣ್ಣೆ ನಿಮ್ಮ ಮುಂದಿದೆ.

ಇದರಲ್ಲಿ ನನ್ನದೇನೂ ಇಲ್ಲ. ನಾನು ಬರಿಯ ಕಡೆಗೋಲು.

ವೇದಕಾಲದ ಋಷಿಮುನಿಗಳು ನನ್ನೊಳಗೆ ನಿಂತು ನುಡಿಸಿದ್ದು; ನಿಮಗಾಗಿ ಬಡಿಸಿದ್ದು. ಮುಂದಿನದೆಲ್ಲ ನಿಮಗೆ ಸಂದದ್ದು.

– ಬನ್ನಂಜೆ ಗೋವಿಂದಾಚಾರ್ಯ